## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1313 |
| 2 | ಸದಸ್ಯರ ಹೆಸರು | : | ಶ್ರೀ ಆರ್. ಧರ್ಮಸೇನಾ |
| 3 | ಉತ್ತರಿಸುವ ದಿನಾಂಕ | : | 21-12-2018 |
| 4 | ಉತ್ತರಿಸುವವರು | : | ಉಪ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದಲ್ಲಿ ರಸ್ತೆಗಳಲ್ಲಿ ನಿಂತು ಕೈಗಾಡಿಗಳವರು ಮತ್ತಿತರು ವ್ಯಾಪಾರ ಮಾಡುತ್ತಾ ಜನ ಸಂಚಾರಕ್ಕೆ ಮತ್ತು ವಾಹನ ಸಂಚಾರಕ್ಕೆ ಅಡಚಣೆ ಮಾಡುತ್ತಿರುವವರ ಮೇಲೆ ಕ್ರಮ ಕೈಗೊಳ್ಳದಿರಲು ಕಾರಣಗವೇನು; | ರಸ್ತೆಗಳಲ್ಲಿ ನಿಂತು ಕೈಗಾಡಿಗಳವರು ಮತ್ತಿತರು ವ್ಯಾಪಾರ ಮಾಡುತ್ತಾ ಜನ ಸಂಚಾರಕ್ಕೆ ಮತ್ತು ವಾಹನ ಸಂಚಾರಕ್ಕೆ ಅಡಚಣೆ ಮಾಡುವುದನ್ನು ಗಮನಿಸಿದ ಕೂಡಲೇ ಸಂಬಂಧಪಟ್ಟ ವಾರ್ಡಿನ ಆರೋಗ್ಯ ಪರಿವೀಕ್ಷಕರ ಹಾಗೂ ವಾರ್ಡ್ ಇಂಜಿನಿಯರ್ ನೇತೃತ್ವದಲ್ಲಿ ಹಾಗೂ ಸಂಬಂಧಿತ ಕಾರ್ಯವ್ಯಾಪ್ತಿಯ ಪೊಲೀಸ್ ಠಾಣೆಯ ಸಹಯೋಗದಿಂದ ಕೈಗಾಡಿಗಳು ಮತ್ತಿತರರನ್ನು ಸ್ಥಳದಿಂದ ತೆರವುಗೊಳಿಸಿ ಸಾರ್ವಜನಿಕರ ಸಂಚಾರಕ್ಕೆ ಅಡಚಣೆ ಉಂಟಾಗದಂತೆ ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಮಲ್ಲೇಶ್ವರಂ, ಜಯನಗರ, ಬಸವನಗುಡಿ, ರಾಜಾಜಿನಗರ ಮುಂತಾದ ಕಡೆಗಳಲ್ಲಿ ಒಂದು ಕಡೆ ಪಾರ್ಕಿಂಗ್‌ಗೆ ಅವಕಾಶ ಇದ್ದು, ಇನ್ನೊಂದು ಕಡೆ ಬೀದಿ ವ್ಯಾಪಾರಿಗಳು ರಸ್ತೆಯಲ್ಲಿ ನಿಲ್ಲುವುದರಿಂದ ಜನ ಓಡಾಲು ಮತ್ತು ವಾಹನ ಸಂಚಾರಕ್ಕೆ ತೀರಾ ಅಡಚಣೆಯಾಗಿದ್ದು, ಈ ಬಗ್ಗೆ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳುತ್ತಿದೆಯೇ; | ಬೀದಿ ಬದಿ ವ್ಯಾಪಾರಿಗಳಿಂದ ತೊಂದರೆಗೊಳಗಾದ ವ್ಯಕ್ತಿಗಳು / ಸಂಸ್ಥೆಗಳಿಂದ ದೂರುಗಳು ಬಂದಲ್ಲಿ ಆರೋಗ್ಯ ಇಲಾಖೆ ಮತ್ತು ಕಾಮಗಾರಿ ಇಲಾಖಾ ಅಧಿಕಾರಿ / ಸಿಬ್ಬಂದಿಗಳ ಸಮನ್ವಯದೊಂದಿಗೆ ಬೀದಿ ವ್ಯಾಪಾರಿಗಳು ರಸ್ತೆಯಲ್ಲಿ ನಿಲ್ಲುವುದರಿಂದ ಜನ ಓಡಾಡಲು ಮತ್ತು ವಾಹನ ಸಂಚಾರಕ್ಕೆ ತೀರಾ ಅಡಚಣೆಯಾಗಿದ್ದಲ್ಲಿ ತೆರವುಗೊಲಿಸಲಾಗುತ್ತಿದೆ. |
| ಇ) | ಪೋಲಿಸ್ ಇಲಾಖೆ ಸಹಕಾರದಿಂದ ಇಂಥ ವ್ಯಾಪಾರಿಗಳನ್ನು ತೆರವುಗೊಳಿಸಲು ಶೀಘ್ರ ಕ್ರಮ ಕೈಗೊಳ್ಳಲಾಗುವುದೇ; | ಬೀದಿ ಬದಿ ವ್ಯಾಪಾರಿಗಳನ್ನು ತೆರವುಗೊಳಿಸಲು ಪೊಲೀಸ್ ಇಲಾಖೆಯ ಸಹಕಾರವನ್ನು ಪಡೆಯಲು ಕ್ರಮ ಕೈಗೊಳ್ಳಲಾಗುವುದು. |

**ಸಂಖ್ಯೆ: ನಅಇ 601 ಎಂಎನ್‌ಜಿ 2018**

**(ಜಿ. ಪರಮೇಶ್ವರ)**
ಉಪ ಮುಖ್ಯಮಂತ್ರಿಗಳು